





(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ಕುರೈಶರು ಪರಿಚಿತರಾದುದಕ್ಕಾಗಿ-

لِاِيْلٰفِ قُرَيْشٍ ۝١

2. (ಅಂದರೆ) ಚಳಿಗಾಲ ಮತ್ತು ಬೇಸಗೆಯ ಪ್ರಯಾಣಗಳಿಗೆ ಪರಿಚಿತರಾದುದಕ್ಕಾಗಿ.[1]

اٖلٰفِهِمْ رِحْلَةَ الشِّتَآءِ وَالصَّيْفِ ۝٢

3. ಅವರು ಈ ಭವನದ[2] ಪ್ರಭುವಿನ ದಾಸ್ಯ-ಆರಾಧನೆ ಮಾಡಲಿ-

فَلْيَعْبُدُوْا رَبَّ هٰذَا الْبَيْتِ ۝٣

4. ಅವನು ಅವರನ್ನು ಹಸಿವೆಯಿಂದ ಪಾರುಗೊಳಿಸಿ ಅವರಿಗೆ ಉಣಿಸಿದನು ಮತ್ತು ಭಯದಿಂದ ರಕ್ಷಿಸಿ ಶಾಂತಿ ಪ್ರದಾನ ಮಾಡಿದನು.[3]

الَّذِيْٓ اَطْعَمَهُمْ مِّنْ جُوْعٍ ۙ وَّ
اٰمَنَهُمْ مِّنْ خَوْفٍ ۝٤ ع

---

1. ಚಳಿಗಾಲ ಮತ್ತು ಬೇಸಿಗೆಯ ಯಾತ್ರೆಗಳೆಂದರೆ ವ್ಯಾಪಾರಾರ್ಥವಾಗಿ ಮಾಡುವ ಪ್ರಯಾಣಗಳು. ಬೇಸಿಗೆಯಲ್ಲಿ ಕುರೈಶರು ಸಿರಿಯಾ ಮತ್ತು ಫೆಲೆಸ್ತೀನ್‌ನ ಕಡೆಗೆ ಹಾಗೂ ಚಳಿಗಾಲದಲ್ಲಿ ಅರೇಬಿಯಾದ ದಕ್ಷಿಣದ ಕಡೆಗೆ ವ್ಯಾಪಾರಾರ್ಥ ಹೋಗುತ್ತಿದ್ದರು. ಈ ಪ್ರಯಾಣಗಳಿಂದಾಗಿಯೇ ಅವರು ಧನಿಕರಾಗಿ ಮಾರ್ಪಟ್ಟಿದ್ದರು.
2. ಈ ಭವನವೆಂದರೆ ಕಅಬಾ ಭವನವಾಗಿದೆ.
3. ಮಕ್ಕಾ ಪಟ್ಟಣವು 'ಹರಮ್' (ನಿಷೇಧಿತ ಪ್ರದೇಶ) ಆಗಿದ್ದುದರಿಂದ ಅರೇಬಿಯಾದ ಯಾವುದೇ ಗೋತ್ರ ಅವರ ಮೇಲೆ ಆಕ್ರಮಣ ನಡೆಸೀತೆಂಬ ಭಯ ಅವರಿಗಿರಲಿಲ್ಲ. ಕುರೈಶರು 'ಕಅಬಾ' ಭವನದ ಪರಿಚಾರಕರಾಗಿದ್ದುದರಿಂದ ಅವರ ವ್ಯಾಪಾರಿ ತಂಡ ಅರಬ್‌ನ ಸಮಸ್ತ ಪ್ರದೇಶದಿಂದ ನಿರ್ಭೀತಿಯಿಂದ ಸಾಗುತ್ತಿತ್ತು. ಯಾರೂ ಅವರನ್ನು ಕೆಣಕುತ್ತಿರಲಿಲ್ಲ.